ಲಿಖಿತ ಮೂಲಕ ಉತ್ತರಿಸುವ
ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು
ನೂರ ನಲವತ್ತಮೂರನೆಯ ಅಧಿವೇಶನ
ಸೋಮವಾರ, ದಿನಾಂಕ : 01 ನೇ ಫೆಬ್ರುವರಿ, 2021

ಉದ್ಯಮಗಳು ಪಡೆದಿರುವ ಅನುದಾನದ ಬಗ್ಗೆ

ಶ್ರೀ ಕಾಂತರಾಜ್ (ಬಿ.ಎಂ.ಎಲ್) (ಸ್ಥಳೀಯ ಸಂಸ್ಥೆಗಳ ಕ್ಷೇತ್ರ):-

92 (201) ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಉನ್ನತ ಶಿಕ್ಷಣ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ ವ್ಯಾಪ್ತಿಯಡಿ ಹಾಲಿ ಸ್ಥಾಪಿತವಾಗಿರುವ ಸರ್ಕಾರಿ ಹಾಗೂ ಖಾಸಗಿ ಸಂಸ್ಥೆ/ಉದ್ಯಮಗಳು ಯಾವುವು ; (ಉದ್ಯಮದ ಹೆಸರು, ಸ್ಥಾಪನೆಗೊಂಡ ವರ್ಷ, ಉದ್ಯಮದ ವಿಳಾಸ, ವಿವರದೊಂದಿಗೆ ಜಿಲ್ಲಾವಾರು ಮಾಹಿತಿ ನೀಡುವುದು)

(ಆ) ಈ 3 ಇಲಾಖೆಗಳಡಿ ಅನುದಾನ ಪಡೆದ ಸರ್ಕಾರಿ ಹಾಗೂ ಖಾಸಗಿ ಸಂಸ್ಥೆ/ಉದ್ಯಮಗಳು ಯಾವುವು ;ಇವುಗಳಲ್ಲಿ ಎಷ್ಟು ಸ್ಥಳೀಯ ಕನ್ನಡಿಗರಿಗೆ ಕೆಲಸ ನೀಡಲಾಗಿರುತ್ತದೆ; ಪಡೆದ ಅನುದಾನ ಎಷ್ಟು ; (ಜಿಲ್ಲಾವಾರು ಸಂಪೂರ್ಣ ಮಾಹಿತಿ ನೀಡುವುದು)

(ಇ) ಈ ಉದ್ಯಮಗಳು ಸಾಮಾಜಿಕ ಹೊಣೆಗಾರಿಕೆ ನಿಧಿಯಡಿ ಎಷ್ಟು ಅನುದಾನವನ್ನು ಮೀಸಲಿಡಲಾಗಿದೆ ಹಾಗೂ ಎಷ್ಟು ಹಣ ಖರ್ಚು ಮಾಡಲಾಗಿದೆ ? (ವಿವರವಾದ ಮಾಹಿತಿ ನೀಡುವುದು)